# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 664
ಸದಸ್ಯರ ಹೆಸರು : ಶ್ರೀ ಕೆ.ಸಿ.ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 17.09.2021
ಉತ್ತರಿಸುವವರು : ಮಾನ್ಯ ರೇಷ್ಮೆ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಜ್ಯದಲ್ಲಿರುವ ಸರ್ಕಾರಿ ರೇಷ್ಮೆ ಕಾರ್ಖಾನೆಗಳ ಸಂಖ್ಯೆ ಎಷ್ಟು; ಇವುಗಳಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಕಾರ್ಖಾನೆಗಳೆಷ್ಟು; ಸ್ಥಗಿತಗೊಂಡಿರುವ ಕಾರ್ಖಾನೆಗಳೆಷ್ಟು; ಸ್ಥಗಿತಗೊಂಡಿರುವುದಕ್ಕೆ ಕಾರಣಗಳೇನು; | ರಾಜ್ಯದಲ್ಲಿ ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ, ಮುಡಿಗುಂಡಂ, ಮಾಂಬಳ್ಳಿ, ಸಂತೇಮರಹಳ್ಳಿ ಮತ್ತು ಚಾಮರಾಜನಗರಗಳಲ್ಲಿ ಒಟ್ಟು 5 ಸರ್ಕಾರಿ ರೇಷ್ಮೆ ಕಾರ್ಖಾನೆಗಳನ್ನು ಹಾಗೂ ದಾವಣಗೆರೆ ಜಿಲ್ಲೆಯ ತೋಳಹುಣಸೆಯಲ್ಲಿ ಸರ್ಕಾರಿ ರೇಷ್ಮೆ ನೂಲು ಬಿಚ್ಚುವ ಕಿರು ಘಟಕವನ್ನು ಸ್ಥಾಪಿಸಲಾಗಿದೆ.<br><br>ಸರ್ಕಾರಿ ರೇಷ್ಮೆ ಕಾರ್ಖಾನೆಗಳಲ್ಲಿ ಸುಮಾರು ಏಳು ದಶಕಗಳ ಹಿಂದೆ ಸ್ಥಾಪಿಸಿದ ಯಂತ್ರೋಪಕರಣಗಳು ಹಳೆಯದಾಗಿ/ ಸವಕಳಿಯಾಗಿ ಪದೇ ಪದೇ ದುರಸ್ತಿಗೆ ಬರುತ್ತಿದ್ದ ಕಾರಣ ಗುಣಮಟ್ಟದ ಕಚ್ಚಾ ರೇಷ್ಮೆ ಉತ್ಪಾದನೆಗೆ ಅಡ್ಡಿಯಾಗಿ ಮತ್ತು ಸದರಿ ಕಾರ್ಖಾನೆಗಳಲ್ಲಿ ಪ್ರಾರಂಭದಲ್ಲಿ ನೇಮಕಗೊಂಡಿದ್ದ ಸಿಬ್ಬಂದಿ/ಕಾರ್ಮಿಕರ ಕಾರ್ಯಕ್ಷಮತೆಯೂ ಕುಂಠಿತಗೊಂಡು ಉತ್ಪಾದಕತೆಯೂ ಕುಂಠಿತವಾಗಿರುತ್ತದೆ. ಅನೇಕ ವರ್ಷಗಳು ನಷ್ಟ ಅನುಭವಿಸಿರುತ್ತವೆ. ಸರ್ಕಾರಿ ಕಾರ್ಖಾನೆಗಳು ನಿರಂತರವಾಗಿ ನಷ್ಟದಲ್ಲಿ ನಡೆಯುತ್ತಿದ್ದ ಕಾರಣಗಳಿಂದ ಎಲ್ಲಾ ಕಾರ್ಖಾನೆಗಳನ್ನು ದಿನಾಂಕ:10.10.2013 ಮತ್ತು ತದನಂತರದ ದಿನಾಂಕಗಳಂದು Industrial Disputes ACT 1947 ಅನ್ವಯ ಸಂಬಂಧಪಟ್ಟ ರೇಷ್ಮೆ ಕಾರ್ಖಾನೆಗಳ ಪ್ರಧಾನ ವ್ಯವಸ್ಥಾಪಕರು/ ವ್ಯವಸ್ಥಾಪಕರು ಲೇ-ಆಫ್ ಘೋಷಣೆ ಮಾಡಿರುತ್ತಾರೆ. |
| ಆ | ಸ್ಥಗಿತಗೊಂಡಿರುವ ಕಾರ್ಖಾನೆಗಳನ್ನು ಪುನಶ್ಚೇತನಗೊಳಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಲೇ-ಆಫ್‌ನಲ್ಲಿರುವ ಕಾರ್ಖಾನೆಯ ಕಾರ್ಮಿಕರುಗಳನ್ನು I.D. ACT 1947 Section 25E ಅನ್ವಯ Work Service Rules ಅಡಿ ರೇಷ್ಮೆ ಇಲಾಖೆಯಲ್ಲಿನ ವಿವಿಧ ಕಛೇರಿ ಮತ್ತು ಇನ್ನಿತರ ಸಂಸ್ಥೆಗಳಿಗೆ ಅನ್ಯ ಕಾರ್ಯ ನಿಮಿತ್ತ ನಿಯೋಜನೆ ಮಾಡಿಕೊಳ್ಳಲಾಗಿದೆ.<br><br>2019-20ನೇ ಸಾಲಿನ ಆಯವ್ಯಯ ಭಾಷಣ ಕಂಡಿಕೆ-70(IV) ರಡಿಯಲ್ಲಿ ಘೋಷಣೆಯಾದ "ಚಾಮರಾಜನಗರ |

| | | |
|---|---|---|
| | | ದ ರೇಷ್ಮೆ ಕಾರ್ಖಾನೆಯನ್ನು ಪುನಃಶ್ಚೇತನ ಗೊಳಿಸುವುದು" ಕಾರ್ಯಕ್ರಮವನ್ನು ಅನುಷ್ಠಾನ ಗೊಳಿಸಿದಲ್ಲಿ, ಈ ಕಾರ್ಯಕ್ರಮವು ಭವಿಷ್ಯತ್ತಿನಲ್ಲಿ ಫಲಪ್ರದಾಯಕವಾಗುವ ಸಾಧ್ಯತೆಗಳು ಕಡಿಮೆ ಇರುವ ಅಂಶಗಳ ಹಿನ್ನಲೆಯಲ್ಲಿ ಸದರಿ ಕಾರ್ಯಕ್ರಮವನ್ನು ಕೈಬಿಡಲಾಗಿರುತ್ತದೆ.<br><br>2019-20 ನೇ ಸಾಲಿನ ಆಯವ್ಯಯ ಭಾಷಣ ಕಂಡಿಕೆ-70(III) ರಡಿಯಲ್ಲಿ ಘೋಷಣೆಯಾದ "ಸಂತೇಮರಹಳ್ಳಿಯ ರೇಷ್ಮೆ ಕಾರ್ಖಾನೆಯಲ್ಲಿ ಹೊಸ ತಾಂತ್ರಿಕತೆಯ ರೀಲಿಂಗ್ ಯಂತ್ರೋಪಕರಣಗಳನ್ನು ಅಳವಡಿಸಿ, ಆ ಭಾಗದ ಯುವಜನರಿಗೆ ರೇಷ್ಮೆ ನೂಲು ಬಿಚ್ಚಾಣಿಕೆ ಕಾರ್ಯದ ತರಬೇತಿ ನೀಡಿ ಸ್ವಾವಲಂಬಿಗಳನ್ನಾಗಿಸುವುದು" ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು 2019-20ನೇ ಸಾಲಿನಲ್ಲಿ ಮೊದಲ ಹಂತದಲ್ಲಿ ಸರ್ಕಾರದಿಂದ ರೂ.40.00 ಲಕ್ಷಗಳ ವಂಟನೆಯು ಬಿಡುಗಡೆಗೊಂಡಿರುತ್ತದೆ. ಕಾರ್ಯಕ್ರಮದ ಕ್ರಿಯಾಯೋಜನೆಯನ್ವಯ ಸಿವಿಲ್ ಕಾಮಗಾರಿಗಳನ್ನು ಇಲಾಖೆಯ ಕಾಮಗಾರಿ ಕೋಶದಿಂದ ಕೈಗೆತ್ತಿಕೊಳ್ಳಲಾಗಿರುತ್ತದೆ. |
| ಇ | ರೇಷ್ಮೆ ಬೆಳೆಗೆ ಉತ್ತೇಜನ ನೀಡಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು ? | ರಾಜ್ಯದಲ್ಲಿ ರೇಷ್ಮೆ ಬೆಳೆಯನ್ನು ಉತ್ತೇಜಿಸಲು ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಲಾಗುತ್ತಿದೆ.<br><br>1. ಸುಧಾರಿತ ಹಿಪ್ಪುನೇರಳೆ ತೋಟ ಬೆಳೆಯಲು, ನರ್ಸರಿ ಬೆಳೆಸಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ ಒದಗಿಸಲಾಗುತ್ತಿದೆ.<br>2. ಹಿಪ್ಪುನೇರಳೆ ತೋಟಕ್ಕೆ ಟ್ರಂಚಿಂಗ್ – ಮಲ್ಚಿಂಗ್ ಮಾಡಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>3. ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಅಳವಡಿಕೆಗೆ ಶೇ.90ರಷ್ಟು ಸಹಾಯಧನ.<br>4. ಹಿಪ್ಪುನೇರಳೆ ತೋಟದ ಮಣ್ಣಿನ ಫಲವತ್ತತೆಗಾಗಿ ಜೈವಿಕಗೊಬ್ಬರ ಬಳಕೆಗೆ ಸಹಾಯಧನ.<br>5. ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಉತ್ತೇಜನಕ್ಕಾಗಿ ಸಹಾಯಧನ.<br>6. ರೇಷ್ಮೆ ಹುಳು ಸಾಕಾಣಿಕೆ ಮನೆ/ಮೌಂಟಿಂಗ್ ಹಾಲ್ ನಿರ್ಮಾಣಕ್ಕೆ ಸಹಾಯಧನ.<br>7. ಸೋಂಕು ನಿವಾರಕಗಳ ಪೂರೈಕೆ ಮತ್ತು ಸಲಕರಣೆಗಳಿಗೆ ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>8. ದ್ವಿತಳಿ ಚಾಕಿ ವೆಚ್ಚಕ್ಕೆ ಸಹಾಯಧನ.<br>9. ಚಾಕಿ ಸಾಕಾಣಿಕಾ ಕೇಂದ್ರದ ಸ್ಥಾಪನೆಗೆ / ಸಲಕರಣೆಗಳಿಗೆ ಖರೀದಿಗೆ ಸಹಾಯಧನ. |

| | | |
|---|---|---|
| | | 10. ನೂತನ ತಾಂತ್ರಿಕತೆಗಳ ಅಳವಡಿಕೆಗೆ ರೈತರಿಗೆ ತರಬೇತಿ ಮತ್ತು ಕಾರ್ಯಾಗಾರ.<br>11. ರೇಷ್ಮೆ ಗೂಡಿನ ಧಾರಣೆ ಕುಸಿತ ಸಂದರ್ಭದಲ್ಲಿ ರೇಷ್ಮೆ ಬೆಳೆಗಾರರಿಗೆ ರಕ್ಷಣಾತ್ಮಕ ದರ ನೀಡಲಾಗುತ್ತಿದೆ.<br>12. ದ್ವಿತಳಿ ಬಿತ್ತನೆ ಬೆಳೆಗಾರರು ಹಾಗೂ ಮೈಸೂರು ಬಿತ್ತನೆ ಬೆಳೆಗಾರರು ಬೆಳೆಯುವ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ / ಬೋನಸ್ ನೀಡಲಾಗುತ್ತಿದೆ.<br>13. ರೇಷ್ಮೆ ಬಿತ್ತನೆ ಬೆಳೆಗಾರರಿಗೆ ಉತ್ಪಾದಕತೆ ಮತ್ತು ಗುಣಮಟ್ಟ ಆಧರಿಸಿ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ.<br>14. ಮೈಸೂರು ಬಿತ್ತನೆ ಪ್ರದೇಶದ ಬೆಳೆಗಾರರಿಗೆ ಬಿದರಿನ ಚಂದ್ರಿಕೆಗಳ ಸರಬರಾಜು<br>15. ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಉತ್ಪಾದಿಸುವ ದ್ವಿತಳಿ ರೇಷ್ಮೆ ಗೂಡಿಗೆ ಕೆ.ಜಿ.ಗೆ ರೂ.10/-ರಂತೆ ಸಾಗಾಣಿಕೆ ವೆಚ್ಚ ನೀಡಲಾಗುತ್ತಿದೆ.<br><br>ಮುಂದುವರೆದು, ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿ ಹಿಪ್ಪುನೇರಳೆ ನರ್ಸರಿ / ತೋಟ ಸ್ಥಾಪನೆ, ತೋಟ ನಿರ್ವಹಣೆ ಮತ್ತು ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಸ್ಥಾಪನೆ ಹಾಗೂ ನಿರ್ವಹಣೆ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿದ್ದು, ರೈತರಿಗೆ ಕೂಲಿ/ಸಾಮಗ್ರಿ ವೆಚ್ಚವನ್ನು ಭರಿಸುವ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗವಕಾಶವನ್ನು ಕಲ್ಪಿಸಿ ಆರ್ಥಿಕ ಸದೃಢತೆಯನ್ನು ಒದಗಿಸಲಾಗುತ್ತಿದೆ. |

**ಸಂಖ್ಯೆ: ರೇಷ್ಮೆ 162 ರೇಕೃವಿ 2021**

**(ಡಾ. ನಾರಾಯಣ ಗೌಡ)**
ರೇಷ್ಮೆ ಹಾಗೂ ಯುವಸಬಲೀಕರಣ
ಮತ್ತು ಕ್ರೀಡಾ ಸಚಿವರು